KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೪ | ಬೆಂಗಳೂರು, ಗುರುವಾರ, ಆಗಸ್ಟ್ ೬, ೨೦೦೯ (ಶ್ರಾವಣ ೧೫, ಶಕ ವರ್ಷ ೧೯೩೧) | ಸಂಚಿಕೆ ೩೨

## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ಉಪವಿಭಾಗಾಧಿಕಾರಿಗಳವರ ಕಛೇರಿ ಹಾಗೂ ಭೂಸ್ವಾಧೀನಾಧಿಕಾರಿಗಳವರ ಕಛೇರಿ, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ**

**ಭೂಸ್ವಾಧೀನ ಅಧಿನಿಯಮ 1894 ರ ಕಲಂ 16(2) ರ ಅನ್ವಯ ಅಧಿಸೂಚನೆ**

**ನಂ. ಎಲ್ಎಕ್ಯೂ:ಎಸ್ಆರ್:10/2005–06, ದಿನಾಂಕ: 23ನೇ ಮಾರ್ಚ್ 2009**

ರಾಜ್ಯ ಸರ್ಕಾರದ ಕರ್ನಾಟಕ ಅಧಿನಿಯಮ 17/1961 ರಲ್ಲಿ ತಿದ್ದುಪಡಿಯಾದಂತೆ ಭೂಸ್ವಾಧೀನ ಅಧಿನಿಯಮ 1994 ರನ್ವಯ ಕಲಂ 16 ರ ಉಪ ಪ್ರಕರಣ(2) ರ ಮೇರೆಗೆ ಮುಂದಿನ ಅನುಸೂಚಿಯಲ್ಲಿ ಸೂಚಿಸಲಾದ ಜಮೀನುಗಳನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಮೊಳಕಾಲ್ಮೂರು ಪಟ್ಟಣ ಪಂಚಾಯ್ತಿ ಘನತ್ಯಾಜ್ಯ ವಸ್ತುಗಳ ವಿಲೇವಾರಿ ಘಟಕ ಉದ್ದೇಶಕ್ಕಾಗಿ ಅಧಿಕೃತವಾಗಿ ಸದರಿ ಭೂಸ್ವಾಧೀನ ಅಧಿನಿಯಮ ಪ್ರಕರಣ 16 ರ ಉಪ ಪ್ರಕರಣ (1) ರಲ್ಲಿ ವಶಪಡಿಸಿಕೊಳ್ಳಲಾಗಿದೆ ಎಂದು ಸಾರ್ವಜನಿಕರ ಹಾಗೂ ಸಂಬಂಧಿಸಿದವರ ತಿಳುವಳಿಕೆಗಾಗಿ ಈ ಅಧಿಸೂಚನೆ ನೀಡುವುದರ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

**ಜಿಲ್ಲೆ: ಚಿತ್ರದುರ್ಗ** **ತಾಲ್ಲೂಕು: ಮೊಳಕಾಲ್ಮೂರು** **ಹೋಬಳಿ: ಕಸಬ** **ಗ್ರಾಮ: ಗುಂಡ್ಲೂರು**

| ಕ್ರ. ಸಂ. | ಸ.ನಂ. | ಜಮೀನಿನ ತರಹೆಯ ವಿವರ | ವಿಸ್ತೀರ್ಣ (ಎ–ಗು) | ವಶಪಡಿಸಿಕೊಂಡ ದಿನಾಂಕ: |
|---|---|---|---|---|
| 1 | 3/1ಎ | ಖುಷ್ಕಿ | 3–39 | 25.2.2009 |

ಪಿ.ಆರ್. 264 ಉಪ ವಿಭಾಗಾಧಿಕಾರಿ ಮತ್ತು ಭೂಸ್ವಾಧೀನಾಧಿಕಾರಿ, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ನಂ: ಎಲ್.ಆರ್.ಎಫ್ (ಎನ್.ಎ)(109) ಸಿ.ಆರ್:20/08–09, ಬೆಂಗಳೂರು, ದಿನಾಂಕ: 6ನೇ ಜೂನ್ 2009**

**ವಿಷಯ:** ಶ್ರೀಮತಿ ಬಿ.ಶಾಲಿನಿರೆಡ್ಡಿ ಕೋಂ ಜಿ.ಎ.ರೆಡ್ಡಿ, ನಂ.58, 5ನೇ ಅಡ್ಡರಸ್ತೆ, ಎಂ.ಎಲ್.ಎ.ಬಡಾವಣೆ, ಆರ್.ಎಂ.ವಿ.2ನೇ ಹಂತ, 4ನೇ ಬ್ಲಾಕ್, ಬೆಂಗಳೂರು–94 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಸಾಸುವೆಘಟ್ಟ ಗ್ರಾಮದ ಸ.ನಂ. 13 ರಲ್ಲಿ 4–34 ಎಕರೆ:ಗುಂಟೆ ಜಮೀನನ್ನು ವಾಸದ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಹೊಂದಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ:** ವಿಶೇಷ ಜಿಲ್ಲಾಧಿಕಾರಿಗಳು, ಅನಧಿಕೃತ ಕಟ್ಟಡ ನಿರ್ಮಾಣ ತಡೆ ಪತ್ರ ಸಂಖ್ಯೆ: ವಿಜಿ(ಜಾದ) ಸಿ.ಆರ್/07/07–08, ದಿನಾಂಕ: 6.2.2009.

ಶ್ರೀಮತಿ ಬಿ.ಶಾಲಿನಿರೆಡ್ಡಿ ಕೋಂ ಜಿ.ಎ.ರೆಡ್ಡಿ, ನಂ.58, 5ನೇ ಅಡ್ಡರಸ್ತೆ, ಎಂ.ಎಲ್.ಎ.ಬಡಾವಣೆ, ಆರ್.ಎಂ.ವಿ.2ನೇ ಹಂತ, 4ನೇ ಬ್ಲಾಕ್, ಬೆಂಗಳೂರು–94 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಸಾಸುವೆಘಟ್ಟ ಗ್ರಾಮದ ಸ.ನಂ. 13 ರಲ್ಲಿ 4–34 ಎಕರೆ:ಗುಂಟೆ ಜಮೀನನ್ನು ವಾಸದ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಹೊಂದಲು ಮಾಡಿರುವ ಬೇಡಿಕೆ ಹಾಗೂ ವಿಶೇಷ ಜಿಲ್ಲಾಧಿಕಾರಿಗಳು, ಅನಧಿಕೃತ ಕಟ್ಟಡ ನಿರ್ಮಾಣ ತಡೆ ರವರ ಪತ್ರದ ನಂ: ವಿಜಿ(ಜಾದ)ಸಿ.ಆರ್/07/07–08, ದಿನಾಂಕ: 6.2.2009 ರಲ್ಲಿ ಪ್ರಸ್ತಾವಿತ ಸಾಸುವೆಘಟ್ಟ ಗ್ರಾಮದ ಸ.ನಂ. 13 ರಲ್ಲಿ 4–34 ಎಕರೆ:ಗುಂಟೆ ಜಮೀನನ್ನು ಹೊಂದಲು ಅವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (IV) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಅರ್ಜಿದಾರರು ಪ್ರಸ್ತಾವಿತ ಜಮೀನು ಸರ್ಕಾರಿ ಹರಾಜಿನಿಂದ ಪಡೆದಿರುತ್ತಾರೆ. ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (IV) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ)ತಾಲ್ಲೂಕು, ಹೆಸರಘಟ್ಟ ಹೋಬಳಿ, ಸಾಸುವೆಘಟ್ಟ ಗ್ರಾಮದ ಸ.ನಂ. 13 ರಲ್ಲಿ 4–34 ಎಕರೆ:ಗುಂಟೆ ಜಮೀನನ್ನು ಶ್ರೀಮತಿ ಬಿ.ಶಾಲಿನಿರೆಡ್ಡಿ ಕೋಂ ಜಿ.ಎ.ರೆಡ್ಡಿ, ನಂ.58, 5ನೇ ಅಡ್ಡರಸ್ತೆ, ಎಂ.ಎಲ್.ಎ.ಬಡಾವಣೆ, ಆರ್.ಎಂ.ವಿ. 2ನೇ ಹಂತ, 4ನೇ ಬ್ಲಾಕ್, ಬೆಂಗಳೂರು–94 ರವರಿಗೆ ವಾಸದ ಉದ್ದೇಶಕ್ಕಾಗಿ ಹೊಂದಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (IV) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಕಂಇ 47 ಶಾಸನ 2001 ಬೆಂಗಳೂರು, ದಿನಾಂಕ: 23.04.2003 ಹಾಗೂ ಸರ್ಕಾರದ ಪತ್ರ ಆರ್.ಡಿ.6 ಎಲ್.ಆರ್.ಎಂ.2006, ದಿನಾಂಕ: 31.5.2008 ರ ನಿರ್ದೇಶನದಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಹೊಂದಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಕೃಷಿ ವಲಯದಲ್ಲಿ ಬರುತ್ತಿದ್ದು, ವಾಸದ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿಸಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
6. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),

ಪಿ.ಆರ್. 268 ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ನಂ: ಎಲ್.ಆರ್.ಎಫ್ (ಎನ್.ಎ)(109) ಸಿ.ಆರ್:13/08–09, ಬೆಂಗಳೂರು, ದಿನಾಂಕ: 6ನೇ ಜೂನ್ 2009**

**ವಿಷಯ:** ಕೃಷಿ ಟೆಕ್ನಾಲಜೀಸ್ ಪ್ರೈ.ಲಿ., ನಂ.29/2, ಕೆ.ಹೆಚ್.ರೋಡ್, ಬೆಂಗಳೂರು–27 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಸಿಂಗಹಳ್ಳಿ ಗ್ರಾಮದ ಸ.ನಂ. 65 ರಲ್ಲಿ 0–34 ಗುಂಟೆ ಜಮೀನನ್ನು ವ್ಯವಸಾಯ/ತೋಟಗಾರಿಕೆ/ ಫಾರಂ ಹೌಸ್ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಹೊಂದಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ:** ವಿಶೇಷ ಜಿಲ್ಲಾಧಿಕಾರಿಗಳು, ಅನಧಿಕೃತ ಕಟ್ಟಡ ನಿರ್ಮಾಣ ತಡೆ ಪತ್ರ ಸಂಖ್ಯೆ: ವಿಜಿ(ಜಾದ) (ಉ.ಅ) ಹರಾಜು/ಸಿ.ಆರ್/54/07–08, ದಿನಾಂಕ: 6.3.2009.

ಕೃಷಿ ಟೆಕ್ನಾಲಜೀಸ್ ಪ್ರೈ.ಲಿ., ನಂ.29/2, ಕೆ.ಹೆಚ್.ರೋಡ್, ಬೆಂಗಳೂರು–27 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಸಿಂಗಹಳ್ಳಿ ಗ್ರಾಮದ ಸ.ನಂ. 65 ರಲ್ಲಿ 0–34 ಗುಂಟೆ ಜಮೀನನ್ನು ವ್ಯವಸಾಯ/ತೋಟಗಾರಿಕೆ/ಫಾರಂ ಹೌಸ್ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಹೊಂದಲು ಮಾಡಿರುವ ಬೇಡಿಕೆ ಹಾಗೂ ವಿಶೇಷ ಜಿಲ್ಲಾಧಿಕಾರಿಗಳು, ಅನಧಿಕೃತ ಕಟ್ಟಡ ನಿರ್ಮಾಣ ತಡೆ ರವರ ಪತ್ರದ ನಂ: ವಿಜಿ(ಜಾದ)(ಉ.ಅ)ಹರಾಜು/ಸಿ.ಆರ್/54/07–08, ದಿನಾಂಕ: 6.3.2009 ರಲ್ಲಿ ಪ್ರಸ್ತಾವಿತ ಸಿಂಗಹಳ್ಳಿ ಗ್ರಾಮದ ಸ.ನಂ. 65 ರಲ್ಲಿ 0–34 ಗುಂಟೆ ಜಮೀನನ್ನು ಹೊಂದಲು ಅವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (IV) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಅರ್ಜಿದಾರರು ಪ್ರಸ್ತಾವಿತ ಜಮೀನು ಸರ್ಕಾರಿ ಹರಾಜಿನಿಂದ ಪಡೆದಿರುತ್ತಾರೆ. ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (IV) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ)ತಾಲ್ಲೂಕು, ಜಾಲ ಹೋಬಳಿ, ಸಿಂಗಹಳ್ಳಿ ಗ್ರಾಮದ ಸ.ನಂ. 65 ರಲ್ಲಿ 0–34 ಗುಂಟೆ ಜಮೀನನ್ನು ಕೃಷಿ ಟೆಕ್ನಾಲಜೀಸ್ ಪ್ರೈ.ಲಿ., ನಂ.29/2, ಕೆ.ಹೆಚ್.ರೋಡ್, ಬೆಂಗಳೂರು–27 ರವರಿಗೆ ವ್ಯವಸಾಯ/ತೋಟಗಾರಿಕೆ/ ಫಾರಂ ಹೌಸ್ ಉದ್ದೇಶಕ್ಕಾಗಿ ಹೊಂದಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (IV) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ವ್ಯಶಾಇ 47 ಶಾಸನ 2001 ಬೆಂಗಳೂರು, ದಿನಾಂಕ: 23.04.2003 ಹಾಗೂ ಸರ್ಕಾರದ ಪತ್ರ ಆರ್.ಡಿ.6 ಎಲ್.ಆರ್.ಎಂ.2008, ದಿನಾಂಕ: 31.5.2008 ರ ನಿರ್ದೇಶನದಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಹೊಂದಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಕೃಷಿ ವಲಯದಲ್ಲಿ ಬರುತ್ತಿದ್ದು, ವ್ಯವಸಾಯ/ತೋಟಗಾರಿಕೆ/ಫಾರಂ ಹೌಸ್ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿಸಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
6. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಪಿ.ಆರ್. 269 ಬೆಂಗಳೂರು ಜಿಲ್ಲೆ, ಬೆಂಗಳೂರು.

**ತಹಶೀಲ್ದಾರ್‌ರವರ ಕಾರ್ಯಾಲಯ, ಆನೇಕಲ್ ತಾಲ್ಲೂಕು, ಆನೇಕಲ್**

**ಪ್ರಕಟಣೆ**

**ನಮೂನೆ–27**

**ನಂ. ಎಲ್ ಎನ್ ಡಿ ಸಿ ಆರ್/487/08–09,**

1) ಕರ್ನಾಟಕ ರಾಜ್ಯ ಸರ್ಕಾರದ ನಿಯಮಾವಳಿಗಳಂತೆ ಸರ್ಕಾರಿ ಗುಂಡು ತೋಪು ಜಮೀನು ಸರ್ಕಾರಿ ಜಮೀನಾಗಿರುತ್ತದೆ. ಅದರಂತೆ ಮುತ್ತನಲ್ಲೂರು ಗ್ರಾಮದ ಸರ್ವೆ ನಂ. 2 ಮತ್ತು 3 ರಲ್ಲಿ 0–22 ಮತ್ತು 0–37 ಎ / ಗುಂ ಜಮೀನನ್ನು ಆಶ್ರಯ ಯೋಜನೆಗೆ ಕಾಯ್ದಿರಿಸಲು ಉದ್ದೇಶಿಸಿದ್ದು, ಸದರಿ ಜಮೀನು ಹಾಲಿ ಸಾರ್ವಜನಿಕ ಉಪಯೋಗಕ್ಕೆ ಅವಶ್ಯಕತೆ ಇರುವುದಿಲ್ಲ. ಆದುದರಿಂದ ಕರ್ನಾಟಕ ಭೂ ಕಂದಾಯ ಕಾಯ್ದೆ 1964 ರ ಕಲಂ 68 (1)ರ ರೀತ್ಯಾ ದತ್ತವಾಗಿರುವ

ಅಧಿಕಾರವನ್ನು ಚಲಾಯಿಸುತ್ತಾ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ.ನಂ. 2 ಮತ್ತು 3 ಜಮೀನಿನಲ್ಲಿ 0–22 ಮತ್ತು 0–37 ಎ.ಗುಂ. ಜಮೀನನ್ನು ಆಶ್ರಯ ಯೋಜನೆಗೆ ಕಾಯ್ದಿರಿಸುವ ಉದ್ದೇಶದಿಂದ ಹಾಗೂ ಸಾರ್ವಜನಿಕರ ಉಪಯೋಗಕ್ಕೆ ಬೇಕಿಲ್ಲದಿರುವ ಪ್ರಯುಕ್ತ ಸದರಿ ಜಮೀನಿನ ಮೇಲೆ ಸಾರ್ವಜನಿಕರ ಹಕ್ಕು ವೈಯಕ್ತಿಕ ಹಕ್ಕುಗಳು ನಿರ್ಗಮನಗೊಳ್ಳುತ್ತವೆ.

2) ಆದ ಪ್ರಯುಕ್ತ ಯಾವುದೇ ವ್ಯಕ್ತಿ ಅಂತಹ ಜಮೀನಿನ ಮೇಲೆ ಆಸಕ್ತಿ ಉಳ್ಳವರು ಅಥವಾ ಇತರೆ ಆಸಕ್ತಿ ಉಳ್ಳವರು ಅಂದರೆ ಸರ್ಕಾರಿ ಗುಂಡು ತೋಪು ಜಮೀನನ್ನು ಆಶ್ರಯ ಯೋಜನೆಗೆ ಕಾಯ್ದಿರಿಸುವ ಉದ್ದೇಶಕ್ಕೆ ವಿಲೇವಾರಿ ಮಾಡಿರುವುದರಿಂದ ತೊಂದರೆಗೊಳಗಾಗಿರುವವರು ಈ ಪ್ರಕಟಣೆಯ ದಿನಾಂಕದಿಂದ 90 ದಿನಗಳ ಒಳಗಾಗಿ ಲಿಖಿತ ಮೂಲಕ ವೇಳೆಯನ್ನು ಮೀರಿ ಬರುವಂತಹ ಆಕ್ಷೇಪಣೆಯನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಅಲ್ಲದೇ ನಿಗದಿತ ವೇಳೆಯಲ್ಲಿ ಯಾವುದೇ ಆಕ್ಷೇಪಣೆಗಳು ತಲುಪದಿದ್ದಲ್ಲಿ ಸದರಿ ಸರ್ಕಾರಿ ಗುಂಡು ತೋಪು ಜಮೀನಿನ 0–22 ಮತ್ತು 0–37 ಗುಂ ಜಮೀನನ್ನು ಸಾರ್ವಜನಿಕವಾಗಿ ವಿಲೇವಾರಿ ಮಾಡುವ ಬಗ್ಗೆ ಯಾವುದೇ ಆಕ್ಷೇಪಣೆಗಳು ಇರುವುದಿಲ್ಲವೆಂದು ಪರಿಗಣಿಸಿ ಕಾನೂನು ರೀತ್ಯಾ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಷೆಡ್ಯೂಲ್**

| | | |
|---|---|---|
| ಜಿಲ್ಲೆ: ಬೆಂಗಳೂರು | ತಾಲ್ಲೂಕು : ಆನೇಕಲ್ | ಗ್ರಾಮ : ಮುತ್ತನಲ್ಲೂರು |
| ಸ.ನಂ.–2 ಮತ್ತು 3 | ವಿಸ್ತೀರ್ಣ : 0–22 ಮತ್ತು 0–37 | ವರ್ಗೀಕರಣ : ಸರ್ಕಾರಿ ಗುಂಡು ತೋಪು |

**ಮೇರೆಗಳು**

ಪೂರ್ವಕ್ಕೆ ಸ.ನಂ.– 1,2
ಪಶ್ಚಿಮಕ್ಕೆ ಸ.ನಂ.–177
ಉತ್ತರಕ್ಕೆ ಸ.ನಂ.– 4
ದಕ್ಷಿಣಕ್ಕೆ.–ರಸ್ತೆ

ತಹಶೀಲ್ದಾರ್,
ಆನೇಕಲ್ ತಾಲ್ಲೂಕು, ಆನೇಕಲ್.

ಪಿ.ಆರ್. 277

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ನಂ:ಎಲ್.ಎನ್.ಡಿ(ಎನ್ ಎ) ಸಿ.ಆರ್: 35 :2008–09, ಬೆಂಗಳೂರು, ದಿನಾಂಕ: 16ನೇ ಜೂನ್ 2009**

**ವಿಷಯ:** ಬೆಂಗಳೂರು ಜಿಲ್ಲೆ, ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಮಧುಗಿರಿಹಳ್ಳಿ ಗ್ರಾಮದ ಸರ್ವೆ ನಂ.25 ರಲ್ಲಿ 9–27 ಎಕರೆ:ಗುಂಟೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ಸಂ:ಆರ್.ಡಿ:265:ಎಲ್‌ಜಿಬಿ/07(ಭಾಗ–6), ಬೆಂಗಳೂರು, ದಿನಾಂಕ: 13/05/08.
2. ತಹಶೀಲ್ದಾರ್, ಉತ್ತರ (ಅಪರ) ತಾಲ್ಲೂಕು ರವರ ಪತ್ರದ ಸಂ:ಎಲ್‌ಎನ್‌ಡಿ:ಸಿಆರ್:496/2007–08
3. ಈ ಕಛೇರಿ ಸಮ ಸಂಖ್ಯೆ ತಿಳುವಳಿಕೆ ಪತ್ರದ ದಿನಾಂಕ: 15.09.2008.
4. ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಇವರ ಪತ್ರದ ಸಂಖ್ಯೆ: ಬೆಂಮಸಾಸಂ/ಕೇಕ/ವಾಣಿಜ್ಯ/ಆಸ್ತಿ/418/2009–10, ದಿನಾಂಕ: 06/05/2009.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ ಜಮೀನುಗಳಲ್ಲಿ ವಿವಿಧ ಸಾರ್ವಜನಿಕ/ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಅಗತ್ಯವಾಗಿರುವ ಹಿನ್ನೆಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಜಮೀನನ್ನು ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ ಉಲ್ಲೇಖ(1) ರಲ್ಲಿನ ಸರ್ಕಾರದ ಪತ್ರದ ಸಂಖ್ಯೆ:ಆರ್‌ಡಿ 265:ಎಲ್‌ಜಿಬಿ/2007 (ಭಾಗ–6), ಬೆಂಗಳೂರು ದಿನಾಂಕ:13.05.2008ರ ಆದೇಶದಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಮಧುಗಿರಿಹಳ್ಳಿ ಗ್ರಾಮದ ಸರ್ವೆ ನಂ. 25 ರಲ್ಲಿ 9–27 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969 ನಿಯಮ 20(1)(ಸಿ) ರನ್ವಯ ಮಾರುಕಟ್ಟೆ ಮೌಲ್ಯದ ಶೇ.50% ರಷ್ಟು ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಬೆಂಗಳೂರು ಇವರಿಗೆ ಮಂಜೂರು ಮಾಡಲು ಸರ್ಕಾರದ ಪೂರ್ವಾನುಮೋದನೆ ನೀಡಲಾಗಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕ ಸೇರಿ ಒಟ್ಟು ರೂ. 48,78,577/– (ರೂಪಾಯಿಗಳು: ನಲವತ್ತೆಂಟು ಲಕ್ಷದ ಎಪ್ಪತ್ತೆಂಟು ಸಾವಿರದ ಐದುನೂರ ಎಪ್ಪತ್ತೇಳು ಮಾತ್ರ)ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:15.09.2008 ರಂದು ತಿಳುವಳಿಕೆ ನೀಡಲಾಗಿತ್ತು. ಅದರಂತೆ ಮೇಲ್ಕಂಡ ಸಂಸ್ಥೆಯವರು ಚಲನ್ ನಂ. 60562075, 60562076, 60562077 ದಿನಾಂಕ:30.04.2009 ರಲ್ಲಿ ಹಣವನ್ನು ಸಂದಾಯ ಮಾಡಿ ಮೂಲ ಚಲನ್ ಹಾಜರು ಪಡಿಸಿದ್ದು ಭೂ ಮಂಜೂರಾತಿ ಆದೇಶವನ್ನು ನೀಡುವಂತೆ ಉಲ್ಲೇಖ (3) ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1) ರ ಸರ್ಕಾರದ ಆದೇಶದಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಮಧುಗಿರಿಹಳ್ಳಿ ಗ್ರಾಮದ ಸರ್ವೆ ನಂ. 25 ರಲ್ಲಿ 9–27 ಎಕರೆ:ಗುಂಟೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1. ಈ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ, ಅದೇ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಬೇಕು ಹಾಗೂ ಇನ್ನಿತರ ಉದ್ದೇಶಗಳಿಗಾಗಿ ಈ ಜಮೀನನ್ನು ಬಳಸಬಾರದು.
2. ಸದರಿ ಜಮೀನು ಮಂಜೂರಾತಿಯಾದ ಉದ್ದೇಶಕ್ಕೆ ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
3. ಮಂಜೂರು ಮಾಡಿರುವ ಜಮೀನಿನಲ್ಲಿ ಕಟ್ಟಡ ನಿರ್ಮಾಣ ಮಾಡುವಾಗ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಅಗತ್ಯ ಪರವಾನಗಿ ಅನುಮೋದನೆ ಇತ್ಯಾದಿಗಳನ್ನು ಕಡ್ಡಾಯವಾಗಿ ಪಡೆಯತಕ್ಕದ್ದು.
4. ಒಂದು ವೇಳೆ ಸದರಿ ಜಮೀನು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವೆಂದು ಕಂಡುಬಂದಲ್ಲಿ ಈ ಆದೇಶವನ್ನು ಹಿಂದಕ್ಕೆ ಪಡೆಯಲಾಗುವುದು.
5. ಸದರಿ ಜಮೀನಿನ ಬಗ್ಗೆ ಯಾವುದೇ ನ್ಯಾಯಾಲಯದಲ್ಲಿ ಮೊಕದ್ದಮೆಗಳು ಬಾಕಿ ಇದ್ದಲ್ಲಿ ಈ ಮಂಜೂರು ಆದೇಶವು ಸದರಿ ಮೊಕದ್ದಮೆಯ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.
6. ಆರ್ಜಿತ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಇತ್ಯಾದಿಗಳನ್ನು ಪಾವತಿ ಮಾಡಿ ಸರ್ಕಾರದ ಪರವಾಗಿ ತಹಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ರವರಿಂದ ಈ ಭೂ ಮಂಜೂರಾತಿ ಬಗ್ಗೆ ನೋಂದಣಿ ಮಾಡಿಸಿಕೊಳ್ಳತಕ್ಕದ್ದು.
7. ಮಂಜೂರಾದ ಜಮೀನಿಗೆ ಭೂ ಕಂದಾಯ ಅಲ್ಲದೇ ಕಾನೂನಿನಡಿಯಲ್ಲಿ ಇತರೆ ತೆರಿಗೆಗಳನ್ನು ವಿಧಿಸಲು ಸ್ಥಳೀಯ ಸಂಸ್ಥೆಗಳಿಗೆ ಅಧಿಕಾರವಿರುತ್ತದೆ. ಈ ಜಮೀನಿನಲ್ಲಿ ಯಾವುದೇ ಹಕ್ಕು ಇರುವುದಿಲ್ಲ. ಬೆಲೆ ಬಾಳುವ ಖನಿಜ ನಿಕ್ಷೇಪಗಳು ಸಂಪೂರ್ಣವಾಗಿ ಸರ್ಕಾರದ ಸ್ವತ್ತಾಗಿರುತ್ತದೆ.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘಿಸಿದಲ್ಲಿ ಈ ಭೂ ಮಂಜೂರಾತಿಯು ತಾನೇ ತಾನಾಗಿ ರದ್ದಾಗುವುದು ಮತ್ತು ಆರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 278

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ನಂ:ಎಲ್.ಎನ್.ಡಿ(ಎನ್ ಎ) ಸಿ.ಆರ್: 37 :2008–09, ಬೆಂಗಳೂರು, ದಿನಾಂಕ: 16ನೇ ಜೂನ್ 2009**

**ವಿಷಯ:** ಬೆಂಗಳೂರು ಜಿಲ್ಲೆ, ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಮಧುಗಿರಿಹಳ್ಳಿ ಗ್ರಾಮದ ಸರ್ವೆ ನಂ.25 ರಲ್ಲಿ 5–13 ಎಕರೆ:ಗುಂಟೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ಸಂ:ಆರ್.ಡಿ:265:ಎಲ್‌ಜಿಬಿ/07(ಭಾಗ–6), ಬೆಂಗಳೂರು, ದಿನಾಂಕ: 13/05/08.
2. ತಹಶೀಲ್ದಾರ್, ಉತ್ತರ (ಅಪರ) ತಾಲ್ಲೂಕು ರವರ ಪತ್ರದ ಸಂ:ಎಲ್‌ಎನ್‌ಡಿ:ಸಿಆರ್:497/2007–08
3. ಈ ಕಛೇರಿ ಸಮ ಸಂಖ್ಯೆ ತಿಳುವಳಿಕೆ ಪತ್ರದ ದಿನಾಂಕ: 15.09.2008.
4. ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಇವರ ಪತ್ರದ ಸಂಖ್ಯೆ: ಬೆಂಮಸಾಸಂ/ಕೇಕ/ವಾಣಿಜ್ಯ/ಆಸ್ತಿ/417/2009–10, ದಿನಾಂಕ: 06/05/2009.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ ಜಮೀನುಗಳಲ್ಲಿ ವಿವಿಧ ಸಾರ್ವಜನಿಕ/ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಅಗತ್ಯವಾಗಿರುವ ಹಿನ್ನೆಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಜಮೀನನ್ನು ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ ಉಲ್ಲೇಖ(1) ರಲ್ಲಿನ ಸರ್ಕಾರದ ಪತ್ರದ ಸಂಖ್ಯೆ:ಆರ್‌ಡಿ 265:ಎಲ್‌ಜಿಬಿ/2007 (ಭಾಗ–6), ಬೆಂಗಳೂರು ದಿನಾಂಕ:13.05.2008ರ ಆದೇಶದಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಮಧುಗಿರಿಹಳ್ಳಿ ಗ್ರಾಮದ ಸರ್ವೆ ನಂ. 25 ರಲ್ಲಿ 5–13 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969 ನಿಯಮ 20(1)(ಸಿ) ರನ್ವಯ ಮಾರುಕಟ್ಟೆ ಮೌಲ್ಯದ ಶೇ.50% ರಷ್ಟು ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಬೆಂಗಳೂರು ಇವರಿಗೆ ಮಂಜೂರು ಮಾಡಲು ಸರ್ಕಾರದ ಪೂರ್ವಾನುಮೋದನೆ ನೀಡಲಾಗಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕ ಸೇರಿ ಒಟ್ಟು ರೂ. 26,85,133/– (ರೂಪಾಯಿಗಳು: ಇಪ್ಪತ್ತಾರು ಲಕ್ಷದ ಎಂಭತ್ತೈದು ಸಾವಿರದ ಒಂದುನೂರ ಮೂವತ್ಮೂರು ಮಾತ್ರ)ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:15.09.2008 ರಂದು ತಿಳುವಳಿಕೆ ನೀಡಲಾಗಿತ್ತು. ಅದರಂತೆ ಮೇಲ್ಕಂಡ ಸಂಸ್ಥೆಯವರು ಚಲನ್ ನಂ. 60562072, 60562073, 60562074 ದಿನಾಂಕ:30.04.2009 ರಲ್ಲಿ ಹಣವನ್ನು ಸಂದಾಯ ಮಾಡಿ ಮೂಲ ಚಲನ್ ಹಾಜರು ಪಡಿಸಿದ್ದು ಭೂ ಮಂಜೂರಾತಿ ಆದೇಶವನ್ನು ನೀಡುವಂತೆ ಉಲ್ಲೇಖ (3) ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಮಧುಗಿರಿಹಳ್ಳಿ ಗ್ರಾಮದ ಸರ್ವೆ ನಂ. 25 ರಲ್ಲಿ 5–13 ಎಕರೆ:ಗುಂಟೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1. ಈ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ, ಅದೇ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಬೇಕು ಹಾಗೂ ಇನ್ನಿತರ ಉದ್ದೇಶಗಳಿಗಾಗಿ ಈ ಜಮೀನನ್ನು ಬಳಸಬಾರದು.
2. ಸದರಿ ಜಮೀನು ಮಂಜೂರಾತಿಯಾದ ಉದ್ದೇಶಕ್ಕೆ ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
3. ಮಂಜೂರು ಮಾಡಿರುವ ಜಮೀನಿನಲ್ಲಿ ಕಟ್ಟಡ ನಿರ್ಮಾಣ ಮಾಡುವಾಗ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಅಗತ್ಯ ಪರವಾನಗಿ ಅನುಮೋದನೆ ಇತ್ಯಾದಿಗಳನ್ನು ಕಡ್ಡಾಯವಾಗಿ ಪಡೆಯತಕ್ಕದ್ದು.
4. ಒಂದು ವೇಳೆ ಸದರಿ ಜಮೀನು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವೆಂದು ಕಂಡುಬಂದಲ್ಲಿ ಈ ಆದೇಶವನ್ನು ಹಿಂದಕ್ಕೆ ಪಡೆಯಲಾಗುವುದು.
5. ಸದರಿ ಜಮೀನಿನ ಬಗ್ಗೆ ಯಾವುದೇ ನ್ಯಾಯಾಲಯದಲ್ಲಿ ಮೊಕದ್ದಮೆಗಳು ಬಾಕಿ ಇದ್ದಲ್ಲಿ ಈ ಮಂಜೂರು ಆದೇಶವು ಸದರಿ ಮೊಕದ್ದಮೆಯ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.
6. ಆರ್ಜಿತ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಇತ್ಯಾದಿಗಳನ್ನು ಪಾವತಿ ಮಾಡಿ ಸರ್ಕಾರದ ಪರವಾಗಿ ತಹಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ರವರಿಂದ ಈ ಭೂ ಮಂಜೂರಾತಿ ಬಗ್ಗೆ ನೋಂದಣಿ ಮಾಡಿಸಿಕೊಳ್ಳತಕ್ಕದ್ದು.
7. ಮಂಜೂರಾದ ಜಮೀನಿಗೆ ಭೂ ಕಂದಾಯ ಅಲ್ಲದೇ ಕಾನೂನಿನಡಿಯಲ್ಲಿ ಇತರೆ ತೆರಿಗೆಗಳನ್ನು ವಿಧಿಸಲು ಸ್ಥಳೀಯ ಸಂಸ್ಥೆಗಳಿಗೆ ಅಧಿಕಾರವಿರುತ್ತದೆ. ಈ ಜಮೀನಿನಲ್ಲಿ ಯಾವುದೇ ಹಕ್ಕು ಇರುವುದಿಲ್ಲ. ಬೆಲೆ ಬಾಳುವ ಖನಿಜ ನಿಕ್ಷೇಪಗಳು ಸಂಪೂರ್ಣವಾಗಿ ಸರ್ಕಾರದ ಸ್ವತ್ತಾಗಿರುತ್ತದೆ.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘಿಸಿದಲ್ಲಿ ಈ ಭೂ ಮಂಜೂರಾತಿಯು ತಾನೇ ತಾನಾಗಿ ರದ್ದಾಗುವುದು ಮತ್ತು ಆರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಪಿ.ಆರ್. 279 ಬೆಂಗಳೂರು ಜಿಲ್ಲೆ, ಬೆಂಗಳೂರು.

**ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ನಡವಳಿಕೆಗಳು**

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಕಾಡುಬೀಸನಹಳ್ಳಿ ಗ್ರಾಮದ ಸರ್ವೆ ನಂ.14 ರಲ್ಲಿನ 0–09 ಗುಂಟೆ ಪ್ರದೇಶವನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿ ಸಾರ್ವಜನಿಕ ಉದ್ದೇಶಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1. ತಹಶೀಲ್ದಾರ್ ಬೆಂಗಳೂರು ಪೂರ್ವ ತಾಲ್ಲೂಕುರವರ ಪತ್ರ ಸಂಖ್ಯೆ:ಎಲ್.ಎನ್.ಡಿ:ಸಿ.ಆರ್:556/08–09 ದಿನಾಂಕ:02.06.2009.

2. ಸರ್ಕಾರದ ಪತ್ರ ಸಂಖ್ಯೆ: ಆರ್.ಡಿ:70:ಎಲ್‌ಜಿಪಿ 2008 ದಿನಾಂಕ: 08.08.2008.

**ಪ್ರಸ್ತಾವನೆ:**

ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಕಾಡುಬೀಸನಹಳ್ಳಿ ಗ್ರಾಮದ ಸರ್ವೆ ನಂ.14 ರಲ್ಲಿ ಒಟ್ಟು 5–26 ಎಕರೆ/ ಗುಂಟೆ ಜಮೀನಿದ್ದು, ಸರ್ಕಾರಿ ಮುಫತ್ತುಕಾವಲು ಎಂದು ವರ್ಗೀಕೃತವಾಗಿರುತ್ತದೆ. 3–01 ಎಕರೆ/ಗುಂಟೆ ಹೊರ ವರ್ತುಲ ರಸ್ತೆಯಾಗಿದ್ದು, 1–00 ಎಕರೆ ವಿಸ್ತೀರ್ಣದ ಜಮೀನಿನಲ್ಲಿ ಶ್ರೀ ಕೃಷ್ಣಪ್ಪರವರು ಅನುಭವದಲ್ಲಿದ್ದು, 1–02 ಎಕರೆ/ಗುಂಟೆ ಖಿಲ್ಲಾ ಇರುವುದಾಗಿ, 0–05 ಗುಂಟೆ ವಿಸ್ತೀರ್ಣದಲ್ಲಿ ದೇವಸ್ಥಾನ, ನೀರಿನ ಟ್ಯಾಂಕ್, ಅಶ್ವಥ ಕಟ್ಟೆ ಮತ್ತು ರಸ್ತೆ ಇದ್ದು, ಪೋಡಿ

ದುರಸ್ತಾಗಿದ್ದು, 0–02 ಗುಂಟೆ ಮತ್ತು ಉಳಿದಿರುವ ಜಮೀನು 0–05 ಗುಂಟೆ ಹಾಗೂ ಗ್ರಾಮ ಠಾಣಕ್ಕೆ ಸೇರಿ ದುರಸ್ತಾಗಿರುವ ಜಮೀನಿನ ಹೊಸ ನಂ.47ರಲ್ಲಿ 0–02 ಗುಂಟೆ ಒಟ್ಟು 0–09 ಗುಂಟೆ ಜಮೀನನ್ನು ಕಾಯ್ದಿರಿಸಲು ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕುರವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ತಹಶೀಲ್ದಾರ್‌ರವರ ಪ್ರಸ್ತಾವನೆ ಮತ್ತು ಮೋಜಣಿದಾರರು ತಯಾರಿಸಿರುವ ನಕ್ಷೆಯನ್ನು ಪರಿಗಣಿಸಿ ಕಾಡುಬೀಸನಹಳ್ಳಿ ಗ್ರಾಮದ ಸ.ನಂ.14 ರಲ್ಲಿನ ಮತ್ತು 0–09 ಗುಂಟೆ ಜಮೀನನ್ನು ಸಾರ್ವಜನಿಕ ಉದ್ದೇಶಗಳಿಗಾಗಿ ಕಾಯ್ದಿರಿಸುವುದು ಸೂಕ್ತವಾಗಿರುತ್ತದೆ. ಅಂತೆಯೇ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ನಂ: ಎಲ್‌ಎನ್‌ಡಿ(ಪೂ)ಸಿಆರ್: 31/09–10, ದಿನಾಂಕ: 17ನೇ ಜೂನ್ 2009**

**ಆದೇಶ**

ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಕಾಡುಬೀಸನಹಳ್ಳಿ ಗ್ರಾಮದ ಸರ್ವೆ ನಂ.14 ರಲ್ಲಿ ಒಟ್ಟು 5–26 ಎಕರೆ/ ಗುಂಟೆ ಜಮೀನಿನ ಪೈಕಿ 0–09 ಗುಂಟೆ ವಿಸ್ತೀರ್ಣದ ಸರ್ಕಾರಿ ಮುಫತ್ತು ಕಾವಲು ಜಮೀನನ್ನು ಉಲ್ಲೇಖ (2)ರ ಸರ್ಕಾರದ ಸುತ್ತೋಲೆಯಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿ ದೇವಸ್ಥಾನ, ನೀರಿನ ಟ್ಯಾಂಕ್, ಅಶ್ವಥ ಕಟ್ಟೆ ಮತ್ತು ರಸ್ತೆ ಮುಂತಾದ ಸಾರ್ವಜನಿಕ ಉದ್ದೇಶಗಳಿಗಾಗಿ ಕಾಯ್ದಿರಿಸಿ ಆದೇಶಿಸಿದೆ.

**ಹೆಚ್. ರಾಮಾಂಜನೇಯ**

ಪಿ.ಆರ್. 280 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್.ಆರ್.ಎಫ್(ಎಸ್)(109)ಸಿ.ಆರ್.5/09–10, ಬೆಂಗಳೂರು, ದಿನಾಂಕ: 18ನೇ ಜೂನ್ 2009**

**ವಿಷಯ:** ಶ್ರೀ ದಿನೇಶ್‌ಸಿಂಗ್, ನಂ.62, 14ನೇ ಕ್ರಾಸ್, 1ನೇ ಬ್ಲಾಕ್, ಆರ್.ಟಿ.ನಗರ, ಬೆಂಗಳೂರು–560032 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ನೆಲಗುಳಿ ಗ್ರಾಮದ ಸ.ನಂ. 38 ರಲ್ಲಿ 0–25 ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಹೊಂದಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ:** ವಿಶೇಷ ಜಿಲ್ಲಾಧಿಕಾರಿಗಳು, ಅನಧಿಕೃತ ಕಟ್ಟಡ ನಿರ್ಮಾಣ ತಡೆ ರವರ ಪತ್ರ ಸಂಖ್ಯೆ: ವಿಜಿಜಾದ (ಬೆಂ.ದ.ತಾ) ಸಿ.ಆರ್/55/07–08, ದಿನಾಂಕ: 8.5.2009.

ಶ್ರೀ ದಿನೇಶ್‌ಸಿಂಗ್, ನಂ.62, 14ನೇ ಕ್ರಾಸ್, 1ನೇ ಬ್ಲಾಕ್, ಆರ್.ಟಿ.ನಗರ, ಬೆಂಗಳೂರು 560032 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ನೆಲಗುಳಿ ಗ್ರಾಮದ ಸ.ನಂ. 38 ರಲ್ಲಿ 0–25 ಜಮೀನನ್ನು ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಹೊಂದಲು ಮಾಡಿರುವ ಬೇಡಿಕೆ ಹಾಗೂ ವಿಶೇಷ ಜಿಲ್ಲಾಧಿಕಾರಿಗಳು, ಅನಧಿಕೃತ ಕಟ್ಟಡ ನಿರ್ಮಾಣ ತಡೆ ರವರ ಪತ್ರದ ನಂ: ವಿಜಿಜಾದ(ಬೆಂ.ದ.ತಾ)ಸಿ.ಆರ್/55/07–08, ದಿನಾಂಕ: 8.5.2009 ರಲ್ಲಿ ಪ್ರಸ್ತಾವಿತ ನೆಲಗುಳಿ ಗ್ರಾಮದ ಸ.ನಂ. 38 ರಲ್ಲಿ 0–25 ಗುಂಟೆ ಜಮೀನನ್ನು ಹೊಂದಲು ಅವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (IV) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಅರ್ಜಿದಾರರು ಪ್ರಸ್ತಾವಿತ ಜಮೀನನ್ನು ಸರ್ಕಾರಿ ಹರಾಜಿನಿಂದ ಪಡೆದಿರುತ್ತಾರೆ. ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (IV) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ನೆಲಗುಳಿ ಗ್ರಾಮದ ಸ.ನಂ. 38 ರಲ್ಲಿ 0–25 ಗುಂಟೆ ಜಮೀನನ್ನು ಶ್ರೀ ದಿನೇಶ್‌ಸಿಂಗ್, ನಂ.62, 14ನೇ ಕ್ರಾಸ್, 1ನೇ ಬ್ಲಾಕ್, ಆರ್.ಟಿ.ನಗರ, ಬೆಂಗಳೂರು–560032 ಹೊಂದಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (IV) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ:ವ್ಯಶಾಇ 47 ಶಾಸನ 2001 ಬೆಂಗಳೂರು, ದಿನಾಂಕ: 23.04.2003 ಹಾಗೂ ಸರ್ಕಾರದ ಪತ್ರ ಆರ್.ಡಿ.6 ಎಲ್.ಆರ್.ಎಂ.2008, ದಿನಾಂಕ: 31.5.2008 ರ ನಿರ್ದೇಶನದಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಹೊಂದಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಕೃಷಿ ವಲಯದಲ್ಲಿ ಬರುತ್ತಿದ್ದು, ಅದೇ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿಸಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
6. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 281

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್.ಎನ್.ಡಿ(ಎ) ಸಿ.ಆರ್:3/09–10, ಬೆಂಗಳೂರು, ದಿನಾಂಕ: 18ನೇ ಜೂನ್ 2009**

**ವಿಷಯ:** ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಗೂಳಿಮಂಗಲ ಗ್ರಾಮದ ಸ.ನಂ. 54 ರಲ್ಲಿ 0.03 ಗುಂಟೆ ಜಮೀನನ್ನು ಸಾರ್ವಜನಿಕ ರಸ್ತೆಗಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** ತಹಶೀಲ್ದಾರ್, ಆನೇಕಲ್ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ: (ಎಸ್) ಸಿ.ಆರ್:46/09–10, ದಿನಾಂಕ:15.6.2009.

ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚಿಕ್ಕನಾಗಮಂಗಲ ಗ್ರಾಮದ ಸ.ನಂ. 26 ರಲ್ಲಿನ 3.11 ಎಕರೆ:ಗುಂಟೆ ಜಮೀನಿಗೆ ಆರ್. ನಾರಾಯಣಪ್ಪ ಎಂಬುವರು ಮಾಲೀಕತ್ವ ಹೊಂದಿದ್ದು ಖಾತೆದಾರರು ಸಹ ಆಗಿರುತ್ತಾರೆ. ಸದರಿ ಜಮೀನಿಗೆ ಹೊಂದಿಕೊಂಡಂತೆ ಸರ್ಜಾಪುರ ಹೋಬಳಿ, ಗೂಳಿಮಂಗಲ ಗ್ರಾಮದ ಸ.ನಂ. 54 ರ ಸರ್ಕಾರಿ ಗೋಮಾಳದಲ್ಲಿ 0.03 ಗುಂಟೆ ಜಮೀನನ್ನು ಚಿಕ್ಕನಾಗಮಂಗಲ ಗ್ರಾಮದ ಸ.ನಂ. 26 ರ ಹಿಡುವಳಿ ಜಮೀನಿಗೆ ರಸ್ತೆಗಾಗಿ ಹಾಗೂ ಸಾರ್ವಜನಿಕ ಉದ್ದೇಶಕ್ಕಾಗಿ ಜನ–ಜಾನುವಾರುಗಳು ಓಡಾಡಲು ಉಪಯೋಗಿಸುತ್ತಿದ್ದು ಈ ಜಮೀನಿಗೆ ರಸ್ತೆ ಸಂಪರ್ಕಕ್ಕಾಗಿ ಬೇರೆ ಜಮೀನು ಇರುವುದಿಲ್ಲವಾದ್ದರಿಂದ ಸದರಿ ಜಮೀನನ್ನು ರಸ್ತೆಗಾಗಿ ಕಾಯ್ದಿರಿಸಲು ತಹಶೀಲ್ದಾರ್, ಆನೇಕಲ್ ತಾಲ್ಲೂಕು ರವರು ಉಲ್ಲೇಖದ ಪತ್ರದಲ್ಲಿ ವರದಿ ನೀಡಿರುತ್ತಾರೆ.

ತಹಶೀಲ್ದಾರ್ ವರದಿಯಂತೆ ಗೂಳಿಮಂಗಲ ಗ್ರಾಮದ ಸ.ನಂ. 54 ರಲ್ಲಿ 0.03 ಗುಂಟೆ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964 ರ ಕಲಂ 71 ರ ಪ್ರಕಾರ ಕಾಯ್ದಿರಿಸಲು ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಗೂಳಿಮಂಗಲ ಗ್ರಾಮದ ಸ.ನಂ. 54 ರ ಸರ್ಕಾರಿ ಗೋಮಾಳದಲ್ಲಿ 0.03 ಗುಂಟೆ ಜಮೀನನ್ನು ಚಿಕ್ಕನಾಗಮಂಗಲ ಗ್ರಾಮದ ಸ.ನಂ. 26 ಮತ್ತು ಇದಕ್ಕೆ ಹೊಂದಿಕೊಂಡಿರುವ ಇತರೆ ಜಮೀನುಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕ ರಸ್ತೆಗಾಗಿ ಉಪಯೋಗಿಸಲು ನಕ್ಷೆಯಲ್ಲಿರುವಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964 ರ ಕಲಂ 71ರ ಪ್ರಕಾರ ಕಾಯ್ದಿರಿಸಿದೆ.

**ಷರತ್ತುಗಳು**

1) ಸದರಿ ರಸ್ತೆಯನ್ನು ಇದಕ್ಕೆ ಲಗತ್ತಾಗಿರುವ ಇತರೆ ಎಲ್ಲಾ ಜಮೀನುಗಳಿಗೆ ಸಾರ್ವಜನಿಕರ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2) ತಹಶೀಲ್ದಾರ್, ಆನೇಕಲ್ ತಾಲ್ಲೂಕು ರವರು ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.
3) ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ರದ್ದುಪಡಿಸಲಾಗುವುದು.
4) ಈ ರಸ್ತೆಯ ನಿರ್ವಹಣೆಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸತಕ್ಕದ್ದು.

**ಹೆಚ್. ರಾಮಾಂಜನೇಯ**

ಪಿ.ಆರ್. 282

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.